ಒಂದಾಣೆ ಮಾಲೆ **230**

# ಇಸ್ಲಾಮ್

(ಮುಹಮ್ಮದ ಸೂಕ್ತಿ ಮುಕ್ತಾವಳಿ ಸಹಿತ)



ಲೇಖಕರು:

ಶ್ರೀ. ಕೆ. ಆತ್ಮಾರಾಮ ಶಾಸ್ತ್ರಿ,

ಪುತ್ತೂರು.



**1959**

ಬೆಲೆ: ೧ ಆಣೆ.

ಒಂದಾಣೆ ಮಾಲೆ, ಮಂಗಳೂರು.

# ಪ್ರಸ್ತಾವನೆ.



ತತ್ತ್ವಶಾಸ್ತ್ರಗಳು ಪಂಡಿತರ ಸಭೆಯ ಕೇವಲ ಚರ್ಚಾವಿಷಯಗಳಾಗಿ ಪರಿಣಮಿಸಿದಂದಿನಿಂದ ಅವುಗಳಿಗೂ ಸಾಮಾನ್ಯ ಜನರಿಗೂ ಇದ್ದ ಸಂಬಂಧವು ತಪ್ಪಿಹೋಗಿದೆ. ಕೊನೆಗೆ ಉಳಿದುಕೊಂಡ ಅಲ್ಪಸ್ವಲ್ಪ ಸಂಬಂಧವೂ ಕೂಡ ಅವರ ಅಧಃಪತನಕ್ಕೆ ಕಾರಣವಾಗಿದೆ. ತತ್ತ್ವಶಾಸ್ತ್ರಗಳಿಗೊದಗುವ ಇಂಥ ದುರಂತಗಳು ತಪ್ಪಬೇಕಾದರೆ ಅವುಗಳು ಪಂಡಿತರ ಮಲ್ಲರಂಗದಿಂದ ಹೊರಬಂದು, ತಮ್ಮ ಆಡಂಬರದ ವೇಷಭೂಷಣಗಳನ್ನು ಕಳಚಿಕೊಂಡು ಸಾಮಾನ್ಯ ಜನರ ಮುಂದೆ ನಿಲ್ಲಬೇಕು. ತಮ್ಮ ಮೈಗದಿರತೂಲಿಕೆಯಿಂದ ಅವರ ಜ್ಞಾನದ ಕಣ್ಣನ್ನು ಅರಳಿಸಬೇಕು. ಇಂಥ ಕಾರ್ಯವನ್ನು ಕಾಲ ಕಾಲಕ್ಕೆ ಬಂದ ಸಾಧು, ಸಂತರು ಆಯಾಯ ಮತ, ಸಂಸ್ಕೃತಿಗಳ ಮೂಲಭೂತ ತತ್ತ್ವಗಳನ್ನು ಸುಲಭ ಶೈಲಿಯಲ್ಲಿ ಸಂಗ್ರಹವಾಗಿ ಗ್ರಥಿಸಿ, ಸುಲಭ ದರದಲ್ಲಿ ಜನತೆಯ ಮುಂದಿಡುವುದು ಹೆಚ್ಚಿನ ಯಶಸ್ಸಿಗೆ ಕಾರಣವಾಗಬಹುದು. ಪ್ರಕೃತ ಇದೇ ಉದ್ದೇಶದಿಂದ ಪ್ರಪಂಚದ ಶ್ರೇಷ್ಠ ಸಂಸ್ಕೃತಿಗಳಲ್ಲೊಂದಾದ "ಇಸ್ಲಾಮ್" ಸಂಸ್ಕೃತಿಯ ಕೆಲವು ವಿಚಾರಗಳನ್ನು ಇಲ್ಲಿ ಗ್ರಂಥರೂಪದಿಂದ ಸಂಗ್ರಹಿಸಿ ಕೊಡಲಾಗಿದೆ. ಇದರಂತೆ ಇತರ ಮತ-ಸಂಸ್ಕೃತಿಗಳ ಸಾರಾಂಶವನ್ನು ಸಂಗ್ರಹಿಸಿಕೊಡುವ ವಿಚಾರವಿದೆ. ಜಿಜ್ಞಾಸುಗಳು ಪ್ರೋತ್ಸಾಹಿಸಬೇಕು, ಅಷ್ಟೆ.

ಇತಿ,

ಪುತ್ತೂರು, 1959. ಕೆ. ಆತ್ಮಾರಾಮ ಶಾಸ್ತ್ರಿ.



# ಇಸ್ಲಾಮ್

ಮಹಮ್ಮದ ಪೈಗಂಬರರಿಂದ ಪ್ರಚಾರಕ್ಕೆ ಬಂದ ಮತಕ್ಕೆ "ಮಹಮ್ಮದೀಯ ಮತ"ವೆಂದೂ, ಅದನ್ನು ಅನುಸರಿಸುವವರಿಗೆ "ಮಹಮ್ಮದೀಯರೆಂ"ದೂ ಹೇಳುವುದು ವಾಡಿಕೆ. ಆದರೆ, ಇದು ತಪ್ಪು. ಇದರ ಸರಿಯಾದ ಹೆಸರು "ಇಸ್ಲಾಮ್" ಎಂದು ಮತ್ತು ಇದರ ಅನುಯಾಯಿಗಳ ಹೆಸರು "ಮುಸ್ಲಿಮ"ರೆಂದು. "ಇಸ್ಲಾಮ್" ಎಂದರೆ "ದೇವರ ಇಚ್ಛೆಗೆ ಅಧೀನದಲ್ಲಿ ಇರುವುದು" ಎಂದರ್ಥ. "ಇಸ್ಲಾಮ್" ಎಂಬ ಶಬ್ದವು "ಶಾಂತಿ" ಎಂಬರ್ಥವುಳ್ಳ ಧಾತುವಿನಿಂದ ಬಂದಿದೆ. ಮುಸ್ಲಿಮರ ಶಿಷ್ಟಾಚಾರದ ವಂದನೆ "ಸಲಾಮುಲೇಕುಮ್" ಎಂಬುದರ ಅರ್ಥವೇ "ನಿನಗೆ ಶಾಂತಿಯಿರಲಿ"ಎಂದು.

ಮುಸ್ಲಿಮರು ಮಹಮ್ಮದರನ್ನು ಪೂಜಿಸುವುದಿಲ್ಲ. ಅವರ ಧರ್ಮದ ಪ್ರಕಾರ, ಅವರು ದೇವದೂತನಾದರೂ ಮರಣವುಳ್ಳ ಮನುಷ್ಯ. ಮೋಸೆಸ್, ಅಬ್ರಹಾಮ(ಇಬ್ರಾಹಿಮ್)ರಂತೆ ಧರ್ಮಪ್ರಚಾರಕ್ಕಾಗಿ ಬಂದಾತ.

ಮಹಮ್ಮದರು ತಾನೊಂದು ಹೊಸ ಮತವನ್ನು ಪ್ರಚಾರಕ್ಕೆ ತರುತ್ತಿರುವುದಾಗಿ ಘೋಷಿಸಿಲ್ಲ. ಅವರ ಮತವು ಮೊದಲಿದ್ದ ಮತಗಳ ಶುದ್ಧ ಸ್ವರೂಪವಾಗಿದೆ, ಅಷ್ಟೆ. ಮತ್ತೆ ಮತ್ತೆ ಚೈತನ್ಯ ತುಂಬಿಬರುವ ಪ್ರವಾದಿಗಳ, ದೇಶಿಕರ ಒಂದು ಅವಿಚ್ಛಿನ್ನ ಶೃಂಖಲೆಯಲ್ಲಿ ಅವರಿಗೆ ನಂಬಿಕೆಯಿದೆ. ಅವರೆಲ್ಲ ಮತ್ತೆ ಮತ್ತೆ ಒಂದೇ ಸತ್ಯವನ್ನು ಕಾಲಕನುಗುಣವಾಗಿ ಹೊಸ ಉತ್ಸಾಹದಿಂದ ಬೋಧಿಸುತ್ತಾರೆ. ಮುಸ್ಲಿಮರು ದಿವ್ಯ ಸಂದೇಶಗಳನ್ನು ಒಪ್ಪುತ್ತಾರೆ. ಸಂದೇಶಗಳಲ್ಲಿ ಕೊನೆಯದಾಗಿ ಬಂದುದು "ಕುರಾನ್." (ಇದು ಈಗಿನ ರೂಪಕ್ಕೆ ಬಂದುದು ಮಹಮ್ಮದರ ಮರಣದ ಬಳಿಕ.) ಇದೇ ಇನ್ನು ಮುಂದೆಯೂ ಮುಂದುವರಿಯುವುದೆಂದು ಅವರ ವಿಶ್ವಾಸ.

ಕುರಾನ್: ಪ್ರವಾದಿಗಳೊಳಗೆ ಮತ್ತು ಇತರ ಅನುಯಾಯಿಗಳೊಳಗೆ ಯಾವ ಭೇದವನ್ನೂ ತೋರಿಸುವುದಿಲ್ಲ. ಕುರಾನಿನ ಉಪಯೋಗ ಎಲ್ಲರಿಗೂ ಒಂದೇ ತೆರನಾಗಿದೆ.

ಮುಸ್ಲಿಮರು ಏಸುವಿನ ಸಂದೇಶಗಳನ್ನು ಮಾನ್ಯಮಾಡುತ್ತಾರಾದರೂ ಅವನ ದೈವಿಕತೆ ಅಥವಾ ದೇವಪುತ್ರತ್ವವನ್ನು ಒಪ್ಪುವುದಿಲ್ಲ. "ನಾವೆಲ್ಲ ದೇವರ ಮಕ್ಕಳೇ—ನಾವು ಅವನ ಕಡೆಗೇ ಸಾಗುವವರು." ಪ್ರತಿಯೊಂದು ಅಣುವಿನ ಹೃದಯದಲ್ಲೂ ದೈವಿಕತೆಯು ಕಿಡಿ ಅಡಗಿಕೊಂಡಿದೆ.

ಮುಸ್ಲಿಮರು ಅವತಾರವನ್ನು ನಂಬುವುದಿಲ್ಲ. ಭಗವಂತನು ಎಲ್ಲಾ ಮಾನವ ಆಕಾಂಕ್ಷೆಗಳಿಂದ, ಅಸಂಪೂರ್ಣತೆಯಿಂದ ಬೇರೆಯಾಗಿದ್ದಾನೆ. ಆತನು ಒಬ್ಬನು, ಅದೃಶ್ಯನು, ಅನಂತನು, ಅವಿಭಾಜ್ಯನು (ಅಪರಿಚ್ಛೇದನು), ಉಪಕಾರಿಯು, ಸರ್ವಶಕ್ತನು, ಸರ್ವಜ್ಞನು, ಸರ್ವವ್ಯಾಪಿಯು, ನ್ಯಾಯಶಾಲಿಯು, ದಯಾಳು, ಪ್ರೇಮ, ಕ್ಷಮೆ. ಆತನ "ಏಕತ್ವ"ದಲ್ಲಿ ಅಚಲವಾದ ಶ್ರದ್ಧೆಯೊಂದೇ ಮುಸ್ಲಿಮನಿಗೆ ಆವಶ್ಯಕ. ಕ್ರೈಸ್ತ ಮತದಲ್ಲಿರುವಂತೆ "ಜ್ಞಾನಸ್ನಾನ" (Baptism or Formal ceremony)ವು ಅಗತ್ಯವಿಲ್ಲ.

ಜೂ (ಯೆಹೂದಿ)ಗಳು ಕ್ರಿಸ್ತನ ಧರ್ಮಸಂಸ್ಥೆಯನ್ನು ತಿರಸ್ಕರಿಸಿದ್ದು ಮತ್ತು ಕ್ರೈಸ್ತರು ಕ್ರಿಸ್ತನನ್ನು ದೈವಿಕ ಪುರುಷನನ್ನಾಗಿ ಮಾಡಿ ಮಿತಿ ಮೀರಿ ಹೊಗಳಿದ್ದು—ಇವೆರಡೂ ತಪ್ಪೆಂದು ಮುಸ್ಲಿಮರ ಅಭಿಪ್ರಾಯ.

ಇಸ್ಲಾಮಿನಲ್ಲಿ ಸಂನ್ಯಾಸ ಪದ್ಧತಿಯಾಗಲಿ, ಪೌರೋಹಿತ್ಯ (Priesthood) ಪದ್ಧತಿಯಾಗಲಿ ಇಲ್ಲ. "ನನ್ನ ಅನುಯಾಯಿಗಳಿಗೆ ಜಗತ್ತಿನಲ್ಲಿ ಬಾಳುವುದಕ್ಕಾಗಿ ಮತ್ತು ಪ್ರಾರ್ಥನೆಯ ನಿಮಿತ್ತ ಮಸೀದಿಯ ಒಂದು ಮೂಲೆಯಲ್ಲಿ ಕುಳ್ಳಿರುವುದಕ್ಕಾಗಿ ವಿಶ್ರಾಂತಿಯು ವಿಹಿತವಾಗಿದೆ." ಸಾಮೂಹಿಕ ಉಪಾಸನೆಯಲ್ಲಿ ಒಳ್ಳೆಯ ಚಾರಿತ್ರ್ಯವುಳ್ಳ ಯಾರೇ ಆಗಲಿ "ಇಮಾಮು" ಅಥವಾ ಮುಖಂಡನಾಗಬಹುದು.

ಆತ್ಮವು ಅಮರವೆಂದೂ, ತನ್ನ ಕರ್ಮಗಳ ಉತ್ತರದಾಯಿತ್ವವು ಅದಕ್ಕಿರುವುದೆಂದೂ ಇಸ್ಲಾಂ ಪ್ರತಿಪಾದಿಸುತ್ತದೆ. ಮೌಲಿಕ ಪಾಪದ ತತ್ತ್ವವನ್ನು ಮುಸ್ಲಿಮರು ಅಂಗೀಕರಿಸುವುದಿಲ್ಲ. "ಜ್ಞಾನಸ್ನಾನ ಮಾಡದ ಮಕ್ಕಳ ಆತ್ಮಗಳು ನಾಶವಾಗುವುವೆಂ"ದು ಅವರು ನಂಬುವುದಿಲ್ಲ. ಪ್ರತಿಯೊಂದು ಜೀವವೂ ತನ್ನ ಮೋಕ್ಷಕ್ಕಾಗಿ ತಾನೇ ಪ್ರಯತ್ನಿಸಬೇಕೆಂದು ಕುರಾನ್ ಆದೇಶಕೊಡುತ್ತದೆ. ಮುಸ್ಲಿಮರಲ್ಲದವರಿಗೆ ಮೋಕ್ಷವಿಲ್ಲವೆಂದು ಇಸ್ಲಾಂ ಹೇಳುವುದಿಲ್ಲ. ಯಾವ ಮತದ ಅನುಯಾಯಿಗಳೇ ಆಗಲಿ ಪುಣ್ಯಶೀಲರಿಗೆ ಮತ್ತು ದೇವರಲ್ಲಿ ಭಕ್ತಿಯುಳ್ಳವರಿಗೆಲ್ಲ ಮೋಕ್ಷವನ್ನದು ಒಪ್ಪು

ತ್ತದೆ. ಮುಸ್ಲಿಮನಾಗಲಿ, ಯಹೂದಿಯಾಗಲಿ, ಕ್ರಿಶ್ಚನ್ ಆಗಲಿ, ಸೇಬಿಯನ್ ಆಗಲಿ—ಯಾರೇ ಆಗಲಿ ದೇವರನ್ನು ಮತ್ತು ಕೊನೆಯ ದಿನ (Last day)ವನ್ನು ನಂಬುವವನು, ಹಾಗೇ ಸತ್ಕಾರ್ಯವನ್ನೆಸಗುವವನು ಅವಶ್ಯವಾಗಿ ಆತನ ಪರಮಾತ್ಮನೊಂದಿಗೆ ಪುನಃ ಸೇರಿಕೊಳ್ಳುವನು. ಅಲ್ಲಿ ಅವನಿಗೆ ಯಾವ ತೆರದ ಭಯವಾಗಲಿ, ದುಃಖವಾಗಲಿ ಬಂದು ತಟ್ಟುವುದಿಲ್ಲ." (ಕುರಾನ್—ಅಧ್ಯಾಯ: ೨-೬೨).

ಜಗಳಗಂಟಿತನಕ್ಕೆ ಇಸ್ಲಾಂ ವಿರೋಧಿ. ಆದರೆ ಆತ್ಮರಕ್ಷಣೆಗಾಗಿ ಯುದ್ಧಮಾಡಲು ಅದು ಒಪ್ಪಿಗೆ ಕೊಡುತ್ತದೆ. "ನಿನ್ನನ್ನು ಯಾರು ಹೊಡೆಯಲು ಬರುತ್ತಾರೋ ಅವರಿಗೆದುರಾಗಿ, ದೇವರೊಪ್ಪುವ ದಾರಿಯಲ್ಲಿ ಯುದ್ಧ ಮಾಡು. ಆದರೆ ದ್ವೇಷ ಬೇಡ. ಆಕ್ರಮಣಕಾರಿಗಳನ್ನು ದೇವರು ಮೆಚ್ಚುವುದಿಲ್ಲ." (ಕುರಾನ್—೨-೧೯೦.) "ಮತ್ತವರು ಶಾಂತಿಯ ಕಡೆಗೆ ಒಲಿದರೆ, ನೀನೂ ಶಾಂತನಾಗು. ದೇವರನ್ನು ನಂಬು. ಅವನು ಆಲಿಸುವವನು ಮತ್ತು ತಿಳಿದುಕೊಳ್ಳುವವನು." (೮-೬೧).

ಇಸ್ಲಾಂ ಪರಮತಸಹಿಷ್ಣುವಲ್ಲವೆಂದೂ, ಅದು ತನ್ನ ಪ್ರಚಾರವನ್ನು ಕತ್ತಿಯಿಂದಲೇ ನಡೆಸುವುದೆಂದೂ ಹೇಳಲು ಅವಕಾಶವೇ ಇಲ್ಲ. ಕುರಾನಿನ ನಿಲುವು ಸ್ಪಷ್ಟವಾಗಿ ಹೀಗಿದೆ: "ಧರ್ಮದಲ್ಲಿ ಬಲಾತ್ಕಾರವೆನ್ನುವುದೇ ಇಲ್ಲ..." (ಅದರ ಇಂಗ್ಲಿಷ್ ಅನುವಾದ ಹೀಗಿದೆ—There is no compulsion in religion. The right direction is henceforth distinct from error. And he who rejecteth false deities and believeth in Allah hath grasped a firm handhold which will never break. Allah is hearer, knower. (ಕುರಾನ್—ಸೂರ: ೨-೨೫೬.)

ಕುಡಿಯುವುದು (ಮದ್ಯಸೇವನೆ ಮಾಡುವುದು), ಜೂಜಾಡುವುದು, ಬಡ್ಡಿ ತೆಗೆದುಕೊಳ್ಳುವುದು ಮೊದಲಾದವುಗಳನ್ನು ನೀಚಕೃತ್ಯಗಳೆಂದು ಇಸ್ಲಾಂ ಬಹಿಷ್ಕರಿಸುತ್ತದೆ. ಮುಹಮ್ಮದ್ ಹೇಳಿದ್ದಾರೆ: "ಬಡ್ಡಿಯ ಪದ್ಧತಿಯು ನಿಷಿದ್ಧವಾಗಿದೆ. ಸಾಲ ತೆಗೆದುಕೊಂಡವರು ಅಸಲನ್ನು ಮಾತ್ರ ತೆರತಕ್ಕದ್ದು...."

ಕ್ರಿ. ಶ. ಏಳರಲ್ಲಿ ರೂಢಿಯಲ್ಲಿದ್ದ ಹೆಣ್ಣು ಶಿಶುಗಳ ಹತ್ಯೆಯ ಭಯಂ

ಕರ ಪದ್ಧತಿಯನ್ನು ಇಸ್ಲಾಂ ರದ್ದುಪಡಿಸಿತು. ಗಂಡಸರಂತೆ ಹೆಂಗಸರಿಗೂ ಲೌಕಿಕ ಧಾರ್ಮಿಕ ಕ್ಷೇತ್ರಗಳೆರಡರಲ್ಲೂ ಸಮಾನತೆಯನ್ನು ಕಲ್ಪಿಸಿ ಕೊಟ್ಟಿತು. ಮುಸ್ಲಿಂ ಸ್ತ್ರೀಯರು ತಮ್ಮ ಗಂಡಂದಿರ, ಹೆತ್ತವರ ಸಂಪತ್ತಿನ ಒಂದು ಭಾಗಕ್ಕೆ ಅಧಿಕಾರವುಳ್ಳವರೆಂದು ನಿರ್ಣೀತವಾಯಿತು.

ದೇವರ ಮುಂದೆ ಎಲ್ಲ ಮನುಷ್ಯರೂ ಸರಿಸಮಾನರು. ಅಲ್ಲಿ ವರ್ಣ, ವಂಶಗಳ ಮಾತ್ಸರ್ಯಕ್ಕೆ ಎಡೆಯಿಲ್ಲ. ಅರಬ-ಅರಬನಲ್ಲದವನೆಂಬ ಭೇದ ವಿಲ್ಲ. ಒಳ್ಳೆಯತನವೊಂದೇ ಬೆಲೆಯನ್ನು ನಿರ್ಧರಿಸುವುದಕ್ಕಿರುವ ಪ್ರಮಾಣ.

"ಹಜ್": 'ಹಜ್' ತೀರ್ಥಯಾತ್ರೆಯೆನ್ನುವುದು ಸಾಮಾನ್ಯಾರ್ಥ ದಲ್ಲಲ್ಲ. ಪವಾಡ, ಮೂಢ ವಿಶ್ವಾಸಗಳಿಂದ ಕೂಡಿದ್ದ ಒಂದು ಪವಿತ್ರ ಸ್ಥಳ ವನ್ನು ಸಂದರ್ಶಿಸುವುದೆಂದಲ್ಲ. ಅಬ್ರಹಾಮನ ದಿವ್ಯಜೀವನಕ್ಕೆ ಅದು ಸ್ಮಾರಕ ವಾಗಿ ಇದೆ. ಈ ಹಜ್ ಯಾತ್ರೆಯು ಜೀವನಯಾತ್ರೆಯ ಸಂಕೇತವಾಗಿದೆ. ಈ "ಹಜ್"ಅನ್ನು ನೆರವೇರಿಸಿದವರಿಗೆ "ಹಾಜಿ"ಗಳೆಂದು ಕರೆಯುತ್ತಾರೆ.

"ಧಾರ್ಮಿಕತೆಯೆಂದರೆ ನಿಮ್ಮ ಮುಖವನ್ನು ಪೂರ್ವಕ್ಕೆ ಅಥವಾ ಪಶ್ಚಿಮಕ್ಕೆ ತಿರುಗಿಸುವುದಲ್ಲ. ಯಾವನು ದೇವರು, ನ್ಯಾಯ ತೀರ್ಪಿನ ದಿನ (ಕೊನೆಯ ದಿನ ಅಥವಾ ಪುನರುತ್ಥಾನ), ಧರ್ಮಶಾಸ್ತ್ರಗಳು, ದೇವ ದೂತರು, ಪ್ರವಾದಿಗಳು—ಇವುಗಳಲ್ಲಿ ನಂಬಿಕೆಯುಳ್ಳವನಾಗಿರುತ್ತಾನೋ, ದೇವರ ಮೇಲಿನ ಪ್ರೀತಿಗಾಗಿ ತನ್ನವರಿಗೂ, ಅನಾಥರಿಗೂ, ದಾರಿಹೋಕ ರಿಗೂ ತನ್ನ ಸಂಪತ್ತನ್ನು ದಾನಮಾಡುತ್ತಾನೋ, ಯುದ್ಧದಲ್ಲಿ ಸೆರೆಸಿಕ್ಕಿದ ವರನ್ನು ಬಂಧನದಿಂದಲೂ, ಗುಲಾಮರನ್ನು ದಾಸ್ಯದಿಂದಲೂ ಬಿಡುಗಡೆ ಗೊಳಿಸುತ್ತಾನೋ, ನ್ಯಾಯವಾದ ಉಪಾಸನೆಯನ್ನು ನಡೆಸುತ್ತಾನೋ, ಬಡವರಿಗೆ "ಸ್ಕಾತ್'' (ದಾನ) ಕೊಡುತ್ತಾನೋ, ಕೊಟ್ಟ ಮಾತನ್ನು ನಡೆಸುತ್ತಾನೋ, ಕರಾರಿನಂತೆ ನಡೆದುಕೊಳ್ಳುತ್ತಾನೋ, ದುಃಖ-ಸಂಕಷ್ಟ ಗಳಲ್ಲಿ ತಾಳ್ಮೆಯಿಂದಿರುತ್ತಾನೋ, ದೇವರ ಭಯದಿಂದಿರುತ್ತಾನೋ, ಪ್ರಾಮಾಣಿಕನಾಗಿರುತ್ತಾನೋ—ಅವನೇ ಧಾರ್ಮಿಕ." (೨-೧೭೭)

ಮುಸ್ಲಿಮರ ಅವಶ್ಯ ಕರ್ತವ್ಯಗಳು: (೧) ಪರಮಾತ್ಮನ ಏಕತ್ವ ದಲ್ಲಿ ಮತ್ತು ದೇವದೂತ ಮುಹಮ್ಮದರ ಧಾರ್ಮಿಕ ಸಂಘದಲ್ಲಿ ದೃಢ ವಿಶ್ವಾಸ. (೨) ದಿನಕ್ಕೆ ಐದು ಬಾರಿ ಪ್ರಾರ್ಥನೆ (ಅರುಣೋದಯ, ಮಧ್ಯಾಹ್ನ, ಅಪರಾಹ್ನ, ಸೂರ್ಯಾಸ್ತ, ರಾತ್ರಿ—ಹೀಗೆ ಐದು ಕಾಲದಲ್ಲಿ

ಪ್ರಾರ್ಥನೆ). (೩) ರವಜ್‌ಸಾನಿನ ಒಂದು ತಿಂಗಳು ಉಪವಾಸ. (೪) ಸಕಾತ್ ಅಥವಾ ದರಿದ್ರರಿಗೆ ದಾನ. (೫) ಜೀವನಾವಧಿಯಲ್ಲಿ ಕೊನೆಯ ಪಕ್ಷ ಒಂದು ಬಾರಿಯಾದರೂ ಮಕ್ಕಾ ಯಾತ್ರೆ.

ಪ್ರಾರ್ಥನೆಯ ಕಾಲದಲ್ಲಿ ಮುಸ್ಲಿಮರು ಮಕ್ಕಾ (ಪಶ್ಚಿಮ)ದ ಕಡೆಗೆ ಮುಖ ಮಾಡುತ್ತಾರೆ. ಇದು ವಾಡಿಕೆಯೇ ಹೊರತು ಧರ್ಮವಿಹಿತವಲ್ಲ. ಆದರೆ ಇದಕ್ಕೊಂದು ಅರ್ಥವಿದೆ. ಯಾವ ಮಕ್ಕಾದಲ್ಲಿ ಅಬ್ರಹಾಮನು ಏಕಾಂಗಿಯಾಗಿ ಒಬ್ಬನೇ ಒಬ್ಬನಾದ ಭಗವಂತನನ್ನು ಧ್ಯಾನಿಸಿದನೋ ಮತ್ತು ಮಹಮ್ಮದರಿಗೆ ಸತ್ಯಪ್ರಕಾಶದ ಸಾಕ್ಷಾತ್ಕಾರವಾಯಿತೋ ಅದರ ಸ್ಮರಣೆಯನ್ನು ಜೀವತ್ತಾಗಿ ಇಡುವುದಕ್ಕಾಗಿಯೇ ಮುಸ್ಲಿಮರು ಪಶ್ಚಿಮ ದಿಕ್ಕನ್ನು ಹೆಚ್ಚು ಆದರಿಸುತ್ತಾರೆ. ಭಗವಂತನು ಸರ್ವವ್ಯಾಪಕನಾದುದರಿಂದ ಇಂಥ ದಿಕ್ಕಿನಲ್ಲೇ ಅವನ ಸಾಕ್ಷಾತ್ಕಾರವಾಗುವುದೆಂಬ ನಿಯಮವನ್ನು ಕುರಾನ್ ಹಾಕಿಕೊಟ್ಟಿಲ್ಲ. "Unto Allah belong the East and the West, and whithersoever ye turn, there is Allah's countenance. Lo! Allah is All-embracing All-knowing." (ದೇವರು ಪೂರ್ವ ಪಶ್ಚಿಮಗಳಲ್ಲಿ ಮಾತ್ರವಲ್ಲ, ನೀನು ಯಾವ ದಿಕ್ಕಿಗೆ ತಿರುಗಿದರೂ ಅಲ್ಲೆಲ್ಲ ಅವನ ಸಾನಿಧ್ಯವಿದೆ. ಅವನು ಸರ್ವವ್ಯಾಪಿ, ಸರ್ವಜ್ಞ. ೨-೧೧೫).

"ಇಸ್ಲಾಮ್ ಶುಚಿತ್ವಕ್ಕೆ ಒಂದು ಪ್ರಾಮುಖ್ಯಸ್ಥಾನವನ್ನು ಕೊಟ್ಟಿದೆ. ಶುಚಿಯಾಗಿರದೆ ಪ್ರಾರ್ಥನೆ ನಡೆಸಬಾರದು"(೪ ೪೩) ಎಂದು ಕುರಾನ್ ಆಜ್ಞಾಪಿಸುತ್ತದೆ.

**ಕುರಾನ್:** ಕುರಾನ್ ಎಂಬುದು "ಕರ" ಎಂದರೆ "ಓದುವುದು" ಎಂಬ ಶಬ್ದದಿಂದ ಬಂದಿದೆ. (ಮಹಮ್ಮದರನ್ನು ದಿವ್ಯವಾಣಿಯು ಮೊದಲು ಎಚ್ಚರಿಸಿದ್ದೇ "ಓದು" ಎಂಬುದಾಗಿ.) ಕುರಾನಿಗೆ ಬೇರೆ ಐದು ಹೆಸರುಗಳಿವೆ. (೧) ಅಲ್‌ಫುರ್‌ಕಾನ್ (ವಿವೇಚಕ). (೨) ಕಲಾಮುಲ್ಲಾಹ್ (ದೇವ ವಾಣಿ). (೩) ಕಿತಾಬ್ (ಗ್ರಂಥ). (೪) ನೂರ್ (ಪ್ರಕಾಶ). (೫) ಅಲ್‌ಹುದ (ಮಾರ್ಗದರ್ಶಕ).

ಕುರಾನ್ ೩೦ ಜುಸ್‌ವ್‌ಗಳಾಗಿಯೂ ೧೧೪ ಸೂರ (ಅಧ್ಯಾಯ)ಗಳಾಗಿಯೂ ವಿಂಗಡಿಸಲ್ಪಟ್ಟಿದೆ.

ಕುರಾನಿನ ಶೈಲಿ ಬಹಳ ಸುಂದರವಾಗಿಯೂ, ಗಂಭೀರವಾಗಿಯೂ ಇದೆ. ಇದಕ್ಕೊಂದು ಅರ್ಥವಾದವೆನಿಸಬಲ್ಲ ಕತೆಯಿದೆ. ಎರಡನೆಯ ಖಲೀಫ ಉಮರನು ಮೊದಲು ಮುಹಮ್ಮದರನ್ನು ಬಹಳವಾಗಿ ವಿರೋಧಿಸುತ್ತಿದ್ದನು. ಒಮ್ಮೆ ಅವರನ್ನು ಕೊಲೆಮಾಡಬೇಕೆಂದು ಮನೆಯಿಂದ ಹೊರಟಾಗ, ದಾರಿಯಲ್ಲಿ ಆಗಲೇ ಇಸ್ಲಾಂ ಧರ್ಮವನ್ನು ಸ್ವೀಕರಿಸಿದ್ದ ತನ್ನ ತಂಗಿಯು ಕುರಾನನ್ನು ಸುಶ್ರಾವ್ಯವಾಗಿ ಓದುತ್ತಿರುವುದನ್ನು ಕೇಳಿ ಮನಸೋತು, ತಾನೂ ಅದನ್ನೋದತೊಡಗಿದನು. ಬಳಿಕ ಅವನು ಮುಸ್ಲಿಮನಾದನು.

ಕುರಾನಿನ ಬಗೆಗೆ ಮುಹಮ್ಮದರು ಹೀಗೆ ಹೇಳುತ್ತಾರೆ—"ಒಂದೊಂದಕ್ಕೊಂದೊಂದು ಭೂಷಣವಿದೆ. ಕುರಾನಿಗೆ ಮಧುರ ಕಂಠವೇ ಭೂಷಣ."

## ಕೆಲವು ವಿಶೇಷ ವಿಷಯಗಳ ಸಂಗ್ರಹ:

**ಪುನರುತ್ಥಾನ**—ಕೊನೆಯ ದಿನ. ಇಲ್ಲಿ ತಾನು ಮಾಡಿದ ಕರ್ಮಗಳಿಗೆ ಅಲ್ಲಿ (ಪರಲೋಕದಲ್ಲಿ) ಫಲವನ್ನು ಭೋಗಿಸುವುದೇ ಪುನರುತ್ಥಾನ ದಿನ. ಮನುಷ್ಯನಲ್ಲದೆ ಪಶುಪಕ್ಷಿಗಳೂ ಇದರಲ್ಲಿ ಭಾಗವಹಿಸುತ್ತವೆ. ಮನುಷ್ಯನು ತನ್ನ ಅಜ್ಞಾನವನ್ನರಿತು, ಹಿಂದಿನ ಒಳ್ಳೆಯದು-ಕೆಟ್ಟದನ್ನು ಕಂಡುಕೊಂಡು ತನ್ನ ಸತ್ಯಸ್ಥಿತಿಯನ್ನು ತಿಳಿದುಕೊಳ್ಳುವುದು ಪುನರುತ್ಥಾನ. "ಆ ದಿನ ಒಂದು ಆತ್ಮ ಇನ್ನೊಂದು ಆತ್ಮಕ್ಕೆ ಹೊಣೆಯಾಗಿ ನಿಲ್ಲಲಾರದು." "ಆ ದಿನ ತಂದೆ, ತಾಯಿ, ಮಡದಿ, ಮಕ್ಕಳು—ಎಲ್ಲರನ್ನೂ ದೂರ ತೊರೆದು ಒಬ್ಬನೇ ನಿಲ್ಲಬೇಕು." "ಪ್ರತಿಯೊಂದು ಆತ್ಮವೂ ತನ್ನ ಕರ್ಮಕ್ಕೆ ತಾನೇ ಹೊಣೆಯಾಗಿರುತ್ತದೆ." "ಪ್ರತಿಯೊಬ್ಬನ ವಿಧಿಯನ್ನೂ ಅವನವನ ಕೊರಳಿಗೇ ಕಟ್ಟಿದ್ದೇವೆ." "ಪುನರುತ್ಥಾನದ ದಿನದಲ್ಲಿ ಪುಸ್ತಕವನ್ನು ತೆರೆದು ಅವನ ಮುಂದಿಡುತ್ತೇವೆ."(ಕುರಾನ್ ವಚನಗಳು.)

**ಹಬ್ಬ ಹುಣ್ಣಿಮೆಗಳು:** (ಇವುಗಳ ದಿನ-ತಾರೀಕುಗಳ ಯಾದಿಯನ್ನು ಬೇಕಾದರೆ ಇದೇ ಮಾಲೆಯಲ್ಲಿ ಪ್ರಕಟವಾದ "ನಮ್ಮ ಹಬ್ಬಗಳು" ಎಂಬ ಗ್ರಂಥದಲ್ಲಿ ಕಾಣಬಹುದು. ಹಬ್ಬ ಹುಣ್ಣಿಮೆಗಳನ್ನು ಕುರಾನ್ ನಿರ್ದೇಶಿಸಿಲ್ಲ. ಆದರೂ ಅವುಗಳಲ್ಲಿ ಎರಡು ಮತಸಂಬಂಧವುಳ್ಳವುಗಳಾಗಿದ್ದು, ಪ್ರಪಂಚದ ಮುಸ್ಲಿಮರೆಲ್ಲ ಆಚರಿಸುತ್ತಾರೆ. "ಈದ್-ಎ-ಸುಹಾ"

ಮತ್ತು "ರಮ್‌ಝಾನ್." "ಈದ್‌-ಎ-ಝುಹಾ"ವನ್ನು ನಮ್ಮಲ್ಲಿ "ಬಕ್ರೀದ್" ಎಂದು ಕರೆಯುತ್ತಾರೆ. ಇಜಿಪ್ಟ್ ಮತ್ತು ತುರ್ಕಿಯಲ್ಲಿ "ಬಯ್‌ರಾಮ್" ಎಂದೂ ಇರಾನಿನಲ್ಲಿ "ಈದ್-ಎ-ಕುರ್‌ಬಾನ್" ಎಂದೂ ಹೇಳುತ್ತಾರೆ. ಇದಕ್ಕೆ "ಬಲಿಹಬ್ಬ"ವೆಂದು ಹೇಳಬಹುದು.

**ರಮ್‌ಝಾನ್:** ಈ ತಿಂಗಳಲ್ಲಿ ಕುರಾನ್ ಪ್ರಕಟವಾಯಿತು. ಆದುದರಿಂದ ಆ ತಿಂಗಳು ಪ್ರತಿಯೊಬ್ಬನೂ ತಪ್ಪದೆ ಉಪವಾಸಮಾಡಬೇಕು. ಇದನ್ನು"ಈದ್ ಉಲ್‌ಫಿತೆರ್" "ಈದ್ ಎಸದೆಕಹ್" 'ಈದ್ ಎಸಘೀರ್' ಎಂದೂ ಕರೆಯುವುದಿದೆ. "ಭಿಕ್ಷೆಯ ಹಬ್ಬ"ವೆಂದರ್ಥ.

"ಮಿಲಾದ್" ಅಥವಾ "ಮೌಲೂದ್" (ಪೈಗಂಬರರ ಜಯಂತಿ) ತುರ್ಕಿ, ಈಜಿಪ್ಟ್, ಭಾರತ, ಇರಾನಿನ ಕೆಲವು ಭಾಗಗಳಲ್ಲಿ ಆಚರಿಸುತ್ತಾರೆ.

**ಷಬ್ ಎಬರಾತ್:** ಈ ದಿನ ಮುಂದಿನ ವರ್ಷದ ಶುಭಾಶುಭ ಫಲಗಳು ದೇವಲೋಕದಲ್ಲಿ ನಿರ್ಣಯಿಸಲ್ಪಡುತ್ತವೆ—ಎಂಬ ನಂಬಿಕೆಯಿದೆ. ನಮ್ಮ ದೀಪಾವಳಿಯಂತೆ ಇದನ್ನಾಚರಿಸುತ್ತಾರೆ.

**ಆಖೀರ್ ಚಾರ್ ಷಂಬ:** ಈ ದಿನ ಪೈಗಂಬರರು ಮಹಾರೋಗವೊಂದರಿಂದ ಗುಣಹೊಂದಿದ್ದರಂತೆ. ಅದರ ಸ್ಮಾರಕವಾಗಿ ಇದನ್ನಾಚರಿಸುತ್ತಾರೆ.

**ನೌರೋಸ್** ಅಥವಾ ಮುಸ್ಲಿಂ ಯುಗಾದಿ: ಇದನ್ನು ವಿಶೇಷವಾಗಿ ಇರಾನಿಯರು ಆಚರಿಸುತ್ತಾರೆ. ಅಲ್ಲಿ ಅದು ಜಾತಿ, ಮತಭೇದವಿಲ್ಲದೆ ನಾಡಹಬ್ಬವಾಗಿದೆ.

**ಮೊಹರಮ್:** ಇದು ಇಮಾಮ್ ಹುಸೇನಿನ ಕೊಲೆಯ ಸ್ಮಾರಕ. ಇವನು ಪೈಗಂಬರರ ಮೊಮ್ಮಗನು. ಇರಾನಿಯನರ ನೆಚ್ಚಿನ ವೀರ. ಇವನು ಸ್ವಧರ್ಮರಕ್ಷಾಗಿ ಪ್ರಾಣತೆತ್ತನು. ಇವನ ಕೊಲೆಯಾದುದು ಕ್ರಿ. ಶ. ೬೮೦ರಲ್ಲಿ.

## ಮಹಮ್ಮದ ಸೂಕ್ತಿಮುಕ್ತಾವಳಿ

ಪರಮಾತ್ಮನು ಒಬ್ಬನೇ. ಅವನು ಒಕ್ಕಟ್ಟನ್ನು ಮೆಚ್ಚುತ್ತಾನೆ.

ತಾಯಿಯು ತನ್ನ ಕೂಸನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ದೇವರು ತನ್ನ ಸೃಷ್ಟಿಯನ್ನು ಪ್ರೀತಿಸುತ್ತಾನೆ.

ಯಾವನು ದೇವರನ್ನು ಸಂಧಿಸಲಿಚ್ಛಿಸುತ್ತಾನೋ ಅವನನ್ನು ಸಂಧಿಸಲು ದೇವರೂ ಇಚ್ಛಿಸುತ್ತಾನೆ.

ದೇವರನ್ನು ನಂಬು. ಆದರೆ ಅದನ್ನು (ಒಂಟೆಯನ್ನು) ಕಟ್ಟು.

"ಭಗವಂತನ ಕರುಣೆಯಿಂದ ರಕ್ಷಿತವಾದ ಆನಂದದ ಉದ್ಯಾನ (ಸ್ವರ್ಗಕ್ಕೆ) ಯಾರೂ ಪ್ರವೇಶಿಸಲು ಸಾಧ್ಯವಿಲ್ಲವೇ?"

ಪೈಗಂಬರರು ಹೇಳಿದರು: ಇಲ್ಲ, "ಸಾಧ್ಯವಿಲ್ಲ."

"ಓ ದೇವದೂತನೆ! ನೀನೂ ಪ್ರವೇಶಿಸಲಾರೆಯಾ?'

ಪೈಗಂಬರರು ತನ್ನ ಕೈಯನ್ನು ಅವನ ತಲೆಯ ಮೇಲಿಟ್ಟು ಹೇಳಿದರು: "ಆತನ ಕೃಪೆಯಿಲ್ಲದೆ ನಾನೂ ಪ್ರವೇಶಿಸಲಾರೆ."

ನರಕವು ಆನಂದದ ಮುಸುಕಿನೊಳಗಿದೆ. ಸ್ವರ್ಗವು ಕಷ್ಟ-ದುಃಖಗಳ ಮುಸುಕಿನೊಳಗಿದೆ.

ಯಾರು ಗೌರವದಿಂದ ತಮ್ಮ ಜೀವನವನ್ನು ಸಂಪಾದಿಸಿಕೊಳ್ಳುತ್ತಾರೋ ಅವರು ದೇವರಿಗೆ ಅತ್ಯಂತ ಪ್ರೀತಿಪಾತ್ರರು.

ಯಾರು ಸ್ವಪರಿಶ್ರಮದಿಂದ ಜೀವನ ನಾಗಿಸುತ್ತಾರೋ ಅವರ ಬಗ್ಗೆ ಅವರ ಬಗೆಗೆ ಮಾತ್ರ ದೇವರು ಕರುಣಾಳು ಆಗಿರುವನು. ತಿರುಪೆ ಬೇಡುವವರನ್ನು ಅವನು ಮೆಚ್ಚುವುದಿಲ್ಲ.

ಕೆಲಸದಾಳಿಗೆ ಅವನ ಮೈಯ ಬೆವರಾರುವ ಮೊದಲೇ ಕೂಲಿಯನ್ನು ಕೊಡು.

ಹುತಾತ್ಮನ ರಕ್ತಕ್ಕಿಂತಲೂ ಪಂಡಿತನ ಶಾಯಿಯು ಪವಿತ್ರವಾದುದು.

ಯಾವನು ಮನೆಯಲ್ಲಿ ವಿದ್ಯೆಯ ಅನ್ವೇಷಣೆ ಮಾಡುತ್ತಿರುತ್ತಾನೋ ಅವನು ದೇವರ ದಾರಿಯಲ್ಲಿ ನಡೆಯುತ್ತಿರುತ್ತಾನೆ.

(ಸ್ವರ್ಗ) ಸಿಂಹಾಸನದ ಮಧ್ಯದಲ್ಲಿ ದೇವರ ಖಜಾನೆಯಿದೆ. ಬೀಗದ ಕೈ ಕವಿಗಳ ನಾಲಿಗೆಯಲ್ಲಿದೆ.

ವಿದ್ಯೆಯನ್ನು ಗಳಿಸುವುದು ಪ್ರತಿಯೊಬ್ಬ ಗಂಡಸಿಗೂ—ಹೆಂಗಸಿಗೂ ಕರ್ತವ್ಯವಾಗಿರುತ್ತದೆ.

ತೊಟ್ಟಿಲಿಂದ ಗೋರಿಯ ತನಕ ವಿದ್ಯೆಯನ್ನರಸುತ್ತಿರು.

ಯಾರು ವಿದ್ಯೆಗಾಗಿ ತಮ್ಮ ಜೀವನವನ್ನು ವಿಾಸಲಾಗಿಟ್ಟಿರುವರೋ ಅವರು ಸಾಯುವುದಿಲ್ಲ.

ಒಂದು ವರ್ಷದ ಭಜನೆ, ಪೂಜೆಗಳಿಗಿಂತ ಒಂದು ತಾಸಿನ ಧ್ಯಾನವೇ ಮೇಲು. ಪ್ರಾರ್ಥನೆಗಾಗಿ ಹೆಚ್ಚು ಸಮಯ ಕಳೆಯುವುದಕ್ಕಿಂತ ವಿದ್ಯೆಗಾಗಿ ಹೆಚ್ಚು ಹೊತ್ತನ್ನು ಉಪಯೋಗಿಸುವುದು ಒಳಿತು.

ವಿದ್ಯೆಯನ್ನು ಸಂಪಾದಿಸು. ಅದು ನಮ್ಮನ್ನು ಕೆಟ್ಟದರಿಂದ ಒಳ್ಳೆಯದಕ್ಕೊಯ್ಯುವುದು. ಅದು ಸ್ವರ್ಗದ ದಾರಿಯನ್ನು ಬೆಳಗಿಸುವುದು. ಅದು ಮರಳುಗಾಡಿನಲ್ಲಿ ನಮ್ಮ ಗೆಳೆಯ. ನಮಗೆ ಆನಂದದ ಮಾರ್ಗದರ್ಶಿ. ದುಃಖದಲ್ಲಿ ಆಧಾರವಾದುದು. ಅದು ನಮ್ಮ ಭೂಷಣ. ಶತ್ರುಗಳೆದುರು ರಕ್ಷಾಕವಚ.

ಕಲಿತವನು ಯಾರು? ಯಾರು ಕಲಿತುದನ್ನು ಅನುಷ್ಠಾನಕ್ಕೆ ತಂದಿರುವನೋ ಅವನು.

ನಿಮ್ಮಲ್ಲಿ ಬಹಳ ಕೆಟ್ಟದಾದುದು ಯಾವುದೆಂದರೆ - ಏಕಾಂಗಿಗಳಾಗಿ ತಿನ್ನುವುದು, ಗುಲಾಮರನ್ನು ನೋಯಿಸುವುದು ಮತ್ತು ಯಾರಿಗೂ ಕೊಡದಿರುವುದು.

ನಿಜವಾದ ವಿನಯವು ಎಲ್ಲಾ ಸದ್ಗುಣಗಳ ಉದ್ಗಮಸ್ಥಾನ.

ವಿನಯ ಮತ್ತು ಸಾಚಲ್ಯವು ಧರ್ಮದ ಎರಡು ಭಾಗಗಳು.

ವಿನಯದ ಎಲ್ಲಾ ರೂಪಗಳೂ ಒಳ್ಳೆಯವೇ.

ಸ್ವರ್ಗವು ತಾಯಿಯ ಕಾಲಬುಡದಲ್ಲಿ ಮಲಗಿದೆ.

"ಓ ದೇವದೂತನೆ! ನಾನೊಂದು ದೊಡ್ಡ ಅಪರಾಧ ಮಾಡಿರುತ್ತೇನೆ ಅದರಿಂದ ನಾನು ಹೇಗೆ ಮುಕ್ತನಾಗಬಹುದು?"

ಪೈಗಂಬರರು ಹೇಳಿದರು: "ನಿನಗೆ ತಾಯಿ ಇರುವಳೇ?"

"ಇಲ್ಲ."

"ಅತ್ತೆ?"

"ಇರುವಳು."

"ಹೋಗು, ಅವಳ ಸೇವೆ ಮಾಡು. ನಿನ್ನ ಅಪರಾಧ ಕ್ಷಮಿಸಲ್ಪಡುವುದು."

ತಂದೆಯ ಸಂತುಷ್ಟಿಯಲ್ಲಿ ದೇವರ ಸಂತುಷ್ಟಿಯಿದೆ. ತಂದೆಯ ಅಸಂತುಷ್ಟಿಯೇ ದೇವರ ಅಸಂತುಷ್ಟಿ.

ಯಾವನು ದಿವ್ಯಾನಂದದ ಬಾಗಿಲನ್ನು ಪ್ರವೇಶಿಸಬೇಕೆಂದಿರುವನೋ ಅವನು ಮೊದಲು ತಂದೆ-ತಾಯಂದಿರನ್ನು ಸಂತೋಷಪಡಿಸಬೇಕು.

ತಂದೆ-ತಾಯಂದಿರಿಂದ ಅಪಕಾರವಾದರೂ ಅವರ ಸೇವೆಮಾಡಬೇಕು.

ಮನುಷ್ಯನ ಮಗು ಬೆಳೆಯುತ್ತಿದ್ದಂತೆಯೆ ಅವನೊಡನೆ ಎರಡು ವಿಷಯಗಳು ಬೆಳೆಯುತ್ತಿರುತ್ತವೆ—ಒಂದು ಸಂಪತ್ತಿನ ಮೇಲೆ ಆಸೆ. ಇನ್ನೊಂದು—ನಿಡಿದಾದ ಬದುಕಿನ ಬಯಕೆ.

"ಉತ್ತಮ ಮನುಷ್ಯನಾರು?"

"ಯಾರ ಜೀವನ ದೀರ್ಘವಾಗಿಯೂ, ಕಾರ್ಯಗಳು ಒಳ್ಳೆಯವುಗಳಾಗಿಯೂ ಇರುವುವೋ ಅವನು ಒಳ್ಳೆಯ ಮನುಷ್ಯನು."

"ಕೆಟ್ಟ ಮನುಷ್ಯನಾರು?"

"ಯಾರ ಜೀವನ ದೀರ್ಘವಾಗಿಯೂ, ಕಾರ್ಯ ಕೆಟ್ಟದಾಗಿಯೂ ಇರುವುದೋ ಅವನು."

ಯಾವನು ಜಾಗ್ರತೆಯಾಗಿ ಮತ್ತು ಪ್ರಾಮಾಣಿಕವಾಗಿ ತನ್ನ ಸಿಟ್ಟನ್ನಡಗಿಸಿಕೊಳ್ಳುವನೋ ಅವನ ಹೃದಯದಲ್ಲಿ ದೇವರು ತುಂಬಿಕೊಳ್ಳುವನು.

ಒಬ್ಬನು ಹೇಳಿದ: "ನನಗೆ ಉಪದೇಶ ಕೊಡಿ."

ಪೈಗಂಬರರು ಹೇಳಿದರು: "ಸಿಟ್ಟಾಗಬೇಡ."

ಜನರನ್ನು ಎತ್ತಿ ಕೆಳಕ್ಕೆ ಕೆಡಹುವವನು ಶಕ್ತಿಶಾಲಿಯಲ್ಲ. ಯಾವನು ತನ್ನ ಸಿಟ್ಟನ್ನು ಸಂಯಮಿಸಿಕೊಳ್ಳುವನೋ ಅವನೇ ಶಕ್ತಿಶಾಲಿ.

ಇನ್ನೊಬ್ಬನು ನನಗೆ ಒಳಿತುಮಾಡಿದರೆ ನಾನು ಅವನಿಗೆ ಒಳಿತು ಮಾಡುವೆ, ಕೆಡುಕುಮಾಡಿದರೆ ಕೆಡುಕುಮಾಡುವೆ—ಹೀಗೆ ಅನ್ನಬೇಡ. ಇನ್ನೊಬ್ಬನು ನಿನಗೆ ಒಳಿತುಮಾಡಿದರೆ ಅವನಿಗೆ ಒಳಿತುಮಾಡು. ಆದರೆ ಕೆಡುಕುಮಾಡಿದರೆ ಕೆಡುಕುಮಾಡಬೇಡ.

"ಓ ದೇವದೂತನೆ!" ಒಬ್ಬ ಕೇಳಿದ, "ಎಷ್ಟು ಬಾರಿ ನಮ್ಮ ಸೇವಕರ ತಪ್ಪುಗಳನ್ನು ಕ್ಷಮಿಸಬೇಕು?" ಮಹಮ್ಮದರು ಉತ್ತರಿಸಲಿಲ್ಲ! ಆತನು ಪುನಃ ಕೇಳಿದನು. ಮಹಮದರು ಮೌನವಾಗಿದ್ದರು. ಮೂರನೆಯ ಬಾರಿ ಕೇಳಿದಾಗ "ದಿನಕ್ಕೆ ಇಪ್ಪತ್ತು ಸಲ ಕ್ಷಮಿಸು" ಅಂದರು.

ಯಾವನು ಶಕ್ತಿಶಾಲಿಯಾಗಿದ್ದು ತನಗೆ ಅಪರಾಧಮಾಡಿದವರನ್ನು ಕ್ಷಮಿಸುವನೋ ಅವನು ದೇವರಿಗೆ ಬಹಳ ಹತ್ತಿರದವನು.

ಎಲ್ಲಿಯ ತನಕ ತನಗೆ ತಾನು ಬಯಸಿಕೊಳ್ಳುವುದನ್ನು ಇನ್ನೊಬ್ಬ ನಿಗೂ ಬಯಸುವುದಿಲ್ಲವೋ ಅಲ್ಲಿಯ ತನಕ ಯಾವನೂ ಶ್ರದ್ಧಾವಂತ ನೆನಿಸುವುದಿಲ್ಲ.

ಯಾವುದು ತನ್ನ ಕಾರ್ಯಕ್ಷೇತ್ರಕ್ಕೆ ಒಳಪಟ್ಟಿಲ್ಲವೋ ಅದರ ಕಡೆಗೆ ಗಮನ ಕೊಡದಿರುವುದು 'ಮುಸ್ಲಿಮ'ನ ಪ್ರಾಮಾಣಿಕತೆಗೆ ಸಾಕ್ಷಿಯಾ ಗಿರುತ್ತದೆ

ಸುಫ್‌ಯಾನನು ಹೇಳಿದನು: "ಇಸ್ಲಾಮಿನ ವಿಷಯ ನನಗೆ ಹೇಳಿರಿ; ಎಂದರೆ ಇನ್ನೊಬ್ಬರೊಡನೆ ವಿಚಾರಿಸುವ ಸಂದರ್ಭ ನನಗೆ ತಪ್ಪುವುದು."

ಮಹಮದರು ಹೇಳಿದರು: "ಹೇಳು, ಓ ಸುಫ್‌ಯಾನ್! 'ನಾನು ದೇವರನ್ನು ನಂಬುತ್ತೇನೆ.' ಬಳಿಕ ಧರ್ಮನಿಯಮಕ್ಕೆ ವಿಧೇಯನಾಗಿರು. ನಿಷಿದ್ಧವಾದುದನ್ನು ತ್ಯಜಿಸು."

ಒಬ್ಬ ಕೇಳಿದ: "ಇಸ್ಲಾಮ್ ಎಂದರೇನು?"

ಮಹಮದರು ಹೇಳಿದರು: "ಮಾತಿನ ಪಾವಿತ್ರ್ಯ ಮತ್ತು ತ್ಯಾಗ."

ಇಸ್ಲಾಮಿಗೆ ಸೇರಿ ನಾಸ್ತಿಕ ವರ್ತನೆಯನ್ನು ಮಾಡುವವರು ದೇವರ ದೊಡ್ಡ ಶತ್ರುಗಳು.

ತನ್ನ ನೆರೆಯವರು ಹಸಿದಿರುವಾಗ ಯಾವನು ಹೊಟ್ಟೆತುಂಬ ಉಣ್ಣು ತ್ತಾನೋ ಅವನು ನಿಜವಾದ ಮುಸ್ಲಿಮನಲ್ಲ.

ಮಿತಿಮೀರಿ ತಿನ್ನುವುದು ಮತ್ತು ಕುಡಿಯುವುದರಿಂದ ನಿಮ್ಮ ಆತ್ಮ ಗಳನ್ನು ಕೊಲ್ಲಬೇಡಿರಿ.

ಹಸಿವಿನಿಂದ (ಉಪವಾಸಮಾಡುವುದರಿಂದ) ಮತ್ತು ಹಸಿವು–ಬಾಯಾ ರಿಕೆಗಳನ್ನು ನಿಗ್ರಹಿಸುವುದರಿಂದ ನಿಮ್ಮ ಆತ್ಮಗಳನ್ನು ಬೆಳಗಿಸಿಕೊಳ್ಳಿರಿ. ಉಪವಾಸಮಾಡಿ ಪರಮಾನಂದದ ಬಾಗಿಲನ್ನು ದೂಡಿರಿ.

ನನಗೆ ತೀರ ಸಮೀಪದವರೆಂದರೆ ಉಪವಾಸವ್ರತರು, ಅವರು ಯಾರೇ ಇರಲಿ, ಎಲ್ಲೇ ಇರಲಿ.

ಪರಸ್ತ್ರೀಯರನ್ನು ಆಸೆಯಿಂದ ನೋಡುವುದು ಕಣ್ಣಿನ ಹಾದರತನ. ಅವರ ವಿಷಯದಲ್ಲಿ ಅಶ್ಲೀಲ ನುಡಿಯುವುದು ನಾಲಿಗೆಯ ಹಾದರತನ.

ಓ! ಮಹಮ್ಮದನ ಅನುಯಾಯಿಗಳೇ! ನಾನು ದೇವರ ಮೇಲೆ ಆಣೆ

ಯಿಟ್ಟು ಹೇಳುತ್ತೇನೆ—ವ್ಯಭಿಚಾರದಷ್ಟು ಅಸಹ್ಯವಾದುದು ದೇವರಿಗೆ ಇನ್ನೊಂದಿಲ್ಲ.

ಮುಸ್ಲಿಮನು ತನ್ನ ಪತ್ನಿಯನ್ನು ದ್ವೇಷಿಸಬಾರದು. ಅವಳ ಒಂದು ಕೆಟ್ಟ ವರ್ತನೆಯ ಬಗೆಗೆ ದ್ವೇಷಿಸುವುದಾದರೆ, ಅವಳ ಇನ್ನೊಂದು ಒಳ್ಳೆಯ ವರ್ತನೆಯ ಬಗೆಗೆ ಹೆಚ್ಚು ಪ್ರೀತಿಸಬೇಕು.

ಸಚ್ಚರಿತ್ರೆಯ ಪತ್ನಿ ಮನುಷ್ಯನ ಒಂದು ಶ್ರೇಷ್ಠ ನಿಧಿ.

ಜಗತ್ತು ಮತ್ತದರಲ್ಲಿರುವ ಎಲ್ಲಾ ವಸ್ತುಗಳೂ ಬೆಲೆಯುಳ್ಳವುಗಳೇ. ಆದರೆ ಅಮೂಲ್ಯವಾದ ವಸ್ತುವೆಂದರೆ ಸಚ್ಚರಿತ್ರೆಯ ಹೆಂಗಸು.

ಬಲಗೈ ಕೊಟ್ಟುದನ್ನು ಎಡಗೈ ತಿಳಿಯದಿದ್ದರೆ ಅದು ದಾನಗಳಲ್ಲಿ ಶ್ರೇಷ್ಠವಾದುದು.

ಹಾದರಗಿತ್ತಿಯೊಬ್ಬಳು ಒಂದು ಬಾವಿಯ ಬಳಿ ಹಾದುಹೋಗುತ್ತಿದ್ದಾಗ ಬಾಯಾರಿ ಸಾಯಲಾಗಿದ್ದ ಒಂದು ನಾಯನ್ನು ಕಂಡಳು. ಕೂಡಲೆ ಆಕೆ ತನ್ನ ಕಾಲಿನಿಂದ ಪಾಪೋಸ (Boot)ನ್ನು ತೆಗೆದು, ಅದಕ್ಕೆ ಹಗ್ಗವಾಗಿ ತನ್ನ ಕತ್ತಿನ ಆಭರಣವನ್ನು ಕಟ್ಟಿ, ಬಾವಿಯಿಂದ ನೀರೆಳೆದು ನಾಯಿಗಿತ್ತಳು. ಇದಕ್ಕಾಗಿ ಆಕೆ ಕ್ಷಮಿಸಲ್ಪಟ್ಟಳು.

ಚಾಡಿ ಹೇಳುವುದು ಸ್ನಾನವನ್ನೂ ಉಪವಾಸವನ್ನೂ ಭ್ರಷ್ಟಗೊಳಿಸುತ್ತದೆ.

ನನ್ನ ಶಿಷ್ಯರಿಗೆ ತೊಂದರೆಯಾದರೂ ಚಿಂತೆಯಿಲ್ಲ—ಪ್ರತಿಯೊಂದು ಪ್ರಾರ್ಥನೆಗೆ ಮೊದಲು ಹಲ್ಲುಗಳನ್ನು ತೊಳೆದು ಸ್ವಚ್ಛವಾಗಿರಿಸಬೇಕೆಂದು ಅವರಿಗೆ ನಿಯಮ ವಿಧಿಸುತ್ತೇನೆ.

ಪರಮಾತ್ಮನು ಪವಿತ್ರನಾಗಿದ್ದಾನೆ. ಅವನು ಪಾವಿತ್ರ್ಯವನ್ನು ಮೆಚ್ಚುತ್ತಾನೆ.

ಪ್ರತಿಯೊಂದು ಒಳ್ಳೆಯ ಕೆಲಸವೂ ತ್ಯಾಗವೆನಿಸುತ್ತದೆ.

ಕೆಟ್ಟವರ ಗುಂಪಿನಲ್ಲಿರುವುದಕ್ಕಿಂತ ಏಕಾಕಿಯಾಗಿರುವುದು ಒಳ್ಳೆಯದು. ಏಕಾಕಿಯಾಗಿರುವುದಕ್ಕಿಂತ ಒಳ್ಳೆಯವರ ಸಂಗದಲ್ಲಿರುವುದು ಮೇಲು. ವೃಥಾ ಮೌನವಾಗಿ ಕುಳಿತಿರುವುದಕ್ಕಿಂತ ವಿದ್ಯಾವಂತರೊಡನೆ ಸಂಭಾಷಿಸುವುದು ಶ್ರೇಯಸ್ಕರ. ಕೆಟ್ಟಮಾತು ಆಡುತ್ತಿರುವುದಕ್ಕಿಂತ ಮೌನವಾಗಿರುವುದು ಉತ್ತಮ.

ಜಗತ್ತಿನ ಮೋಹ ಎಲ್ಲಾ ಕೆಡುಕುಗಳಿಗೂ ತಾಯಿಬೇರು.

ದೇವರು ಹೇಳಿದನು: "ನಾನು ಅಡಗಿದ ನಿಧಿಯಾಗಿದ್ದೆ. ನಾನು ಪ್ರಕಾಶಕ್ಕೆ ಬರಲು ಇಚ್ಛಿಸಿದೆ. ಅದಕ್ಕಾಗಿ ಮಾನವನನ್ನು ಸೃಷ್ಟಿಸಿದೆ."

ನೀನು ನಿನ್ನ ಸೃಷ್ಟಿಕರ್ತ್ರನನ್ನು ಪ್ರೀತಿಸುತ್ತೀಯೋ? ಮೊದಲು ನಿನ್ನ ಮಾನವಾವಸ್ಥೆಯನ್ನು ಪ್ರೀತಿಸು.

ನಿಮ್ಮಲ್ಲಿ ಯಾರೊಬ್ಬನೂ ಮರಣವನ್ನು ಬಯಸದಿರಲಿ. ಒಳ್ಳೆಯ ಕೆಲಸ ಮಾಡುತ್ತ ಹೆಚ್ಚು ಸಮಯ ಬಾಳಿದರೆ ಪುಣ್ಯಫಲವನ್ನು ಹೆಚ್ಚು ಸಂಚಯಿಸಬಹುದು. ಮಾಡಿದ ಪಾಪಕರ್ಮಗಳಿಗಾಗಿ ನಿಜವಾದ ಪಶ್ಚಾತ್ತಾಪದಿಂದ ದೇವರ ಕ್ಷಮೆಯನ್ನು ಸಂಪಾದಿಸಬಹುದು. ಸಾಯುವ ಸಮಯ ಬಾರದೆ ಅದಕ್ಕಾಗಿ ಹಂಬಲಿಸಬಾರದು. ಮರಣ ಬಂದಾಗ ಅಂಜದೆ ಅದನ್ನು ಸ್ವಾಗತಿಸಬೇಕು.

ಅನಂತಯಾನದಲ್ಲಿ ಗೋರಿಯು ಒಂದು ಘಟ್ಟ.

ಸತ್ತವನ ಬಗೆಗೆ ಕೆಟ್ಟ ಮಾತು ಹೇಳಬೇಡ.

ಜೂವಿನದಾಗಲಿ, ಕ್ರಿಶ್ಚನದಾಗಲಿ—ಯಾರದೇ ಆಗಲಿ, ನಿನ್ನ ಬಳಿಯಿಂದ ಶವವು ಹಾದುಹೋಗುತ್ತಿದ್ದರೆ ಎದ್ದು ನಿಲ್ಲು.

ನನ್ನ ಹೃದಯವು ನನ್ನ ಅನುಯಾಯಿಗಳಿಗಾಗಿ ಎಷ್ಟು ದುಃಖದಿಂದ ಆವೃತವಾಗಿದೆ! ದಿನಕ್ಕೆ ನೂರಾರು ಬಾರಿ ಅವರನ್ನು ಕ್ಷಮಿಸುವಂತೆ ದೇವರೊಡನೆ ಕೇಳಿಕೊಳ್ಳುತ್ತೇನೆ.

ಓ ಮುಹಮ್ಮದನ ಅನುಯಾಯಿಗಳೆ! ನಾನು ಆತನ ಮೇಲೆ ಆಣೆಯಿಟ್ಟು ಹೇಳುತ್ತೇನೆ—ಭವಿಷ್ಯತ್ತಿನ ರಾಜ್ಯದಲ್ಲಿ ಏನಿರುವುದೆಂಬುದನ್ನು ನಾನು ತಿಳಿದಿರುವುದನ್ನು ನಿಮಗೆ ತಿಳಿಸಿದರೆ ನೀವು ಸ್ವಲ್ಪ ನಗುತ್ತೀರಿ. ಆದರೆ ಹೆಚ್ಚು ಅಳುತ್ತೀರಿ.



Edited, Printed & Published by K. V. Shenoy
at The Prabhat Printers Ltd., Mangalore.